4. Lease period shall be coterminous with lease under the MMRD Act up to 12-1-2017 (from 13-1-2007).
5. The project authority shall not be allowed to construct infrastructural facilities like building etc., on the forest land.
6. The check dams shall be constructed by the project authority to arrest the flow of suspended particles. The project proponents should provide for adequate arrangements for removing the accumulated material from behind these dams.
7. No change of methodology of working and scope of working should be made without prior approval of the competent authority.
8. The lessee shall carryout rigid soil and water conservation measures as suggested by Forest Department.
9. The Lessee shall protect and nurture, the natural tree growth in the mined area.
10. The Lessee shall, as along as the Lease is in force, pay the yearly rent regularly to Government, in advance, the first of such payments to be made on the day of signing the agreement and the subsequent annual payment on the corresponding day and month of the succeeding years. 18 and half percent interest will be levied on belated payments for the period of 90 days, thereafter a penal rate of interest at 22 and half percent shall be charged on the amount due.
11. The lessee shall undertake fire protection measures in the leased area and the area surrounding it up to one Km.
12. The lessee should not cut trees without prior permission of Forest Officers and all permitted felling should be handed over to Forest Department under cover of receipt. Transportation of ore should be strictly as per transit rules.
13. The lessee shall abide by any other conditions laid down by Govt. of India State Government/Forest Department from time to time in respect of forestland lease.
14. All labourers connected to mining activity should have an identity card duly issued by the lessee, under intimation to the concerned Range Forest Officer and to the Deputy Conservator of Forests, Bellary.
15. The Lessee shall pay compensation to the workmen for any injury, death, disability, etc., caused or occurred during the time of execution of work under Workmen`s Compensation Act or any Act in force from time to time. The Lessee is responsible for any commission/s and or commissions of his workmen.
16. The Lessee shall abide by the provisions of all the laws for the time being in force relating to working of minerals and matters affecting safety, health and convenience of the lessee`s employees or of the public doing execution of his (LESSEE) work.
17. The Lessee shall keep correct accounts showing the quantity and other particulars of all the minerals obtained and dispatched from the leased area and the number of persons employed therein, also complete plan or working of leased area.
18. Consolidated statement and complete map shall be maintained up to date and kept in the mining area by the person in charge of mining operations and produce on demand to the inspecting officer of the rank of Forest Guard and above at any time. The list of workers and the authorized representatives of the Lessee should be furnished to the Deputy Conservator of Forests, Bellary and Conservator of Forests, Bellary.
19. The Rules of Karnataka Forest Act, 1963 and Karnataka Forest Rules 1969 should be strictly followed by the Lessee in addition to Karnataka Forest Manual 1976 and other Rules and Regulations pertaining to working of the mining lease in forest area.
20. Lessee should abide by the Forest (Conservation) Act 1980 and amendments thereof issued from time to time by the Government of India.
21. After completing the extraction of minerals the area thus exploited should be filled back to facilitate to take up afforestation work.
22. The lessee or his agent or his labourers should not indulge in any forest offences.
23. In case of violation of any of the agreement conditions by the Lessee, the Deputy Conservator of Forests, Bellary, has the right to cancel the lease agreement.

24. The lessee will instruct and endeavor that all his labourers and staff do not carry the inflammable material as a preventive measure against any eventualities of forest fires.
25. The Lessee, his staff and labourers have to give full co-operation to Forest Officers in extinguishing the forest fires and prevention/booking of forest offences.
26. The Lessee should provide suitable help to the fire watchers during the fire season to the Forest Department on the request of the Deputy Conservator of Forests/Range Forest Officer/Forest Guard from February to June every year.
27. The Lessee should bear the cost of regeneration of such safety zone and also bear the cost of afforestation over one and half times of the safety zone are in degraded forest area.
28. If any dispute arises on the interpretation and implementation of above conditions and working difficulty the matter will be referred to the Government of Karnataka and its decision thereon shall be binding on both parties. (Lr.No.SPM 286A/96-97 dated: 21.02.97 of S.B. Minerals, Hospet).
29. The lessee has to pay the Net Present Value (NPV) fixed by the Govt. Notification No.FEE 247 FGL 2002 dated 17/01/2004.
30. The mining activity in the forest area shall be carried out as per the approved mining plan from the IBM.
31. The Environmental clearance shall be obtained from the Ministry of Environment and Forests as per EIA Notification dated: 27.01.1994.
32. The consent of State Pollution Control Board shall be obtained under Air and Water Act before the commencement of mining operation and it shall be renewed every year.
33. The User Agency shall ensure that there is no damage to the available wildlife.
34. The Forest land shall not be used for any purpose other than that specified in the proposal.
35. The lessee shall execute an agreement with the Forest Dept. binding himself to abide by all usual conditions and terms as per orders of the Govt. as well as Principal Chief Conservator of Forests.
36. The lessee shall take-up the planting work on the static dumps during the advance mining operations and put retaining wall around the dumps.
37. In case of violation of agreement conditions, the Deputy Conservator of Forests, is authorized under section 82 of Karnataka Forest Act 1963 forfeit the lease.
38. The lessee has to pay extraction cost of Forest Department for felling of trees in the fresh leased area.
39. The reclamation and rehabilitation of the mining area will be reviewed at an interval of 5 years i.e., 10,15 & $19^{th}$ year and if there is no satisfactorily progress at an of the interval period the diversion of land will be revoked.
40. The lessee shall submit the map fully marked by latitude and longitude on all the corners taken by GPS before the final approval.
41. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By Order and in the name of the Governor of Karnataka,

**P.R. KALAVATHI**

PR- 1387

Under Secretary to Government,
Forest, Ecology and Environment Department.

ಒಳಾಡಳಿತ ಸಚಿವಾಲಯ

ವಿಷಯ: ಶ್ರೀ ಎಲ್. ಶಿವಲಿಂಗಯ್ಯ, ಡಿಎಸ್‌ಪಿ, ಮಾರ್ಷಲ್, ಕರ್ನಾಟಕ ವಿಧಾನ ಸಭೆ, ವಿಧಾನ ಸೌಧ, ಬೆಂಗಳೂರು ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ: 3753/2004 ರಲ್ಲಿ ನ್ಯಾಯ ಮಂಡಳಿ ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸುವ ಬಗ್ಗೆ ಆದೇಶ.

ಓದಲಾಗಿದೆ:
1) ಸರ್ಕಾರದ ಆದೇಶ ಸಂಖ್ಯೆ:ಒಇ 164 ಪೊಸಿಅ 2003 ದಿನಾಂಕ:22-05-2004.
2) ಅರ್ಜಿದಾರರು ಕೆ.ಎ.ಟಿ.ಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ: 3753/2004, ದಿನಾಂಕ:24-06-2004.
3) ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅಂತಿಮ ಆದೇಶ ದಿನಾಂಕ:06-03-2006.

ಪ್ರಸ್ತಾವನೆ:

ಶ್ರೀ ಎಲ್.ಶಿವಲಿಂಗಯ್ಯ, ಡಿಎಸ್‌ಪಿ, ಮಾರ್ಷಲ್, ಕರ್ನಾಟಕ ವಿಧಾನ ಸಭೆ, ವಿಧಾನ ಸೌಧ, ಬೆಂಗಳೂರು ಇವರು 1992 ಕೆ.ಜಿ.ಎಫ್.ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ರಿವಾಲ್ವರ್ ಸಂಖ್ಯೆ:693182ಅನ್ನು ದಾಖಲೆಗಳಲ್ಲಿ ತೋರಿಸದೇ ಕರ್ತವ್ಯ ನಿರ್ಲಕ್ಷತೆ

ತೋರಿದ್ದರೆ ಹಿನ್ನೆಲೆಯಲ್ಲಿ ದಿನಾಂಕ:13-08-1992 ರಿಂದ 19-01-1994ರ ವರೆಗೆ ಅಮಾನತ್ತಿನಲ್ಲಿಟ್ಟು, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ, `ಸೆನ್ಸೂರ್` ಶಿಕ್ಷೆ ವಿಧಿಸಲಾಗಿತ್ತು. ಈ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಸರ್ಕಾರವು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:22-05-2004ರ ಆದೇಶದಲ್ಲಿ ಅರ್ಜಿದಾರರ ಮೇಲ್ಮನವಿಯನ್ನು ತಿರಸ್ಕರಿಸಿ, ಇವರ ವಿರುದ್ಧದ ಆರೋಪ ಸಾಬೀತಾಗಿದ್ದು ಶಿಕ್ಷೆ ವಿಧಿಸಿರುವ ಕಾರಣ, ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಲು ಸಾಧ್ಯವಿಲ್ಲವೆಂದೂ, ಈ ಅವಧಿಯನ್ನು `ಕರ್ತವ್ಯದ ಮೇಲಿಲ್ಲದ ಅವಧಿ` (Non-duty) ಎಂದು ಪರಿಗಣಿಸಲಾಗಿತ್ತು.

ಅರ್ಜಿದಾರರು ಈ ಆದೇಶಗಳ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ:3753/2004ಅನ್ನು ದಾಖಲಿಸಿದ್ದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ:06-03-2006ರ ತನ್ನ ಅಂತಿಮ ತೀರ್ಪಿನಲ್ಲಿ ಅರ್ಜಿದಾರರ ಅರ್ಜಿಯನ್ನು ಅಂಗೀಕರಿಸಿ, ಶಿಸ್ತು ಪ್ರಾಧಿಕಾರಿಯ ಆದೇಶ ಸಂಖ್ಯೆ:ಸಿಬಿ/5/54/92-93, ದಿನಾಂಕ:28-08-1995ರ ಆದೇಶವನ್ನು ಮತ್ತು ಮೇಲ್ಮನವಿ ಪ್ರಾಧಿಕಾರಿಯ ಆದೇಶ ಸಂಖ್ಯೆ:ಒಇ 164 ಪೊಸಿಅ 2003, ದಿನಾಂಕ:22-05-2004ಅನ್ನು ರದ್ದುಗೊಳಿಸಿ, 1993 ರಿಂದ ಪೂರ್ವಾನ್ವಯವಾಗುವಂತೆ ಬಡ್ತಿ ನೀಡಲು ಹಾಗೂ ತತ್ಪರಿಣಾಮವಾದ ಎಲ್ಲಾ ಸೌಲಭ್ಯಗಳನ್ನು ನಿಯಮಾನುಸಾರ ನೀಡುವಂತೆ ಆದೇಶಿಸಿದೆ. ಈ ಆದೇಶದ ಅನುಷ್ಠಾನಕ್ಕೆ ನಾಲ್ಕು ತಿಂಗಳ ಅವಧಿ ನಿಗದಿ ಪಡಿಸಿದೆ. ಕಾನೂನು ಕೋಶವೂ ಹಾಗೂ ಕಾನೂನು ಇಲಾಖೆಯು ಈ ಪ್ರಕರಣವು ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಅಭಿಪ್ರಾಯಪಟ್ಟಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅಂತಿಮ ತೀರ್ಪಿನನ್ವಯ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 127 ಪೊಸಿಅ 2004 ಬೆಂಗಳೂರು, ದಿನಾಂಕ:1ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯ ದಿನಾಂಕ:28-08-1995ರ ಮತ್ತು ಸರ್ಕಾರದ ದಿನಾಂಕ:22-05-2004ರ ಆದೇಶಗಳನ್ನು ರದ್ದುಪಡಿಸಿ, ಶ್ರೀ ಎಲ್.ಶಿವಲಿಂಗಯ್ಯ, ಡಿಎಸ್‌ಪಿ, ಮಾರ್ಷಲ್, ಕರ್ನಾಟಕ ವಿಧಾನ ಸಭೆ, ವಿಧಾನ ಸೌಧ, ಬೆಂಗಳೂರು ಇವರ ದಿನಾಂಕ:13-08-1992 ರಿಂದ 19-01-1994 ರವರೆಗಿನ ಅಮಾನತ್ತಿನ ಅವಧಿಯನ್ನು `ಕರ್ತವ್ಯದ ಮೇಲಿನ ಅವಧಿ` ಎಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಕಾನೂನು ಕೋಶದ ದಿನಾಂಕ:06-06-2006ರ ಹಾಗೂ ಕಾನೂನು ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಲಾ-2598 ALS-I /2006, ದಿನಾಂಕ:21-06-2006ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎ. ಕುಲಕರ್ಣಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1363

ವಿಷಯ: ಶ್ರೀ ಎನ್. ಗಂಗರಾಜ್, ಮಾಜಿ ಪಿಐ, ಹನೂರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

ಓದಲಾಗಿದೆ:
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಆದೇಶ ಸಂಖ್ಯೆ:ಸಿಬಿ/8/54/1998-99 ದಿನಾಂಕ:30-09-2005.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05-11--2005.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/54/1998-1999, ದಿನಾಂಕ:21-12-2005.

ಪ್ರಸ್ತಾವನೆ:

ಶ್ರೀ ಎನ್.ಗಂಗರಾಜ್, ಮಾಜಿ ಪಿಐ ಹನೂರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ದೋಷರೋಪಣೆ:

"ಆಪಾದಿತ ಪೊಲೀಸ್ ಅಧಿಕಾರಿ ಶ್ರೀ ಎನ್.ಗಂಗರಾಜ್, ಪೊಲೀಸ್ ನಿರೀಕ್ಷಕರು ಆದ ನೀವು, ಈ ಹಿಂದೆ ದಿನಾಂಕ:31-07-97 ರಿಂದ 31-10-98 ರವರೆಗೆ ಮೈಸೂರು ನಗರ, ಪೊಲೀಸ್ ಆಯುಕ್ತರು ಕಛೇರಿಯ ಸಿಸಿಆರ್‌ಬಿಯಲ್ಲಿ ಪಿಐ ಆಗಿ ಸೇವೆ ಸಲ್ಲಿಸುತ್ತಿದ್ದಾಗ, ದಿನಾಂಕ:08-08-98ರಂದು ಬೆಂಗಳೂರಿನ ಅಲಸೂರು ನಂದನವನ ನಿವಾಸಿ, ಕು:ಚಂದ್ರಿಕಾ ಇವರು ಶ್ರೀ ಕೆಂಪಯ್ಯ, ಪೊಲೀಸ್ ಕಮೀಷನರ್ ರವರಿಗೆ ದೂರು ಅರ್ಜಿಯನ್ನು ಸಲ್ಲಿಸಿ, ಇಂದಿರಾನಗರ ಮಹೇಂದ್ರ ಎಂಬ ವ್ಯಕ್ತಿ ತನ್ನೊಂದಿಗೆ ಮದುವೆ ಆಗುತ್ತೇನೆ ಎಂದು ನಂಬಿಸಿ ಕೆಎ-05-9795 ಕಾರಿನಲ್ಲಿ ತನ್ನ ಗೆಳೆಯನೊಂದಿಗೆ ಕರೆದುಕೊಂಡು ಹೋಗಿ ತನ್ನ ಶೀಲಹರಣ ಮಾಡಿದ್ದು, ಈ ಬಗ್ಗೆ ಮಹೇಂದ್ರ ಮತ್ತು ಆತನ ಸ್ನೇಹಿತನ ಮೇಲೆ ಕ್ರಮ ಕೈಗೊಳ್ಳುವಂತೆ ಬಂದ ಅರ್ಜಿಯನ್ನು ಮೈಸೂರು ಕಮೀಷನರ್ ರವರು ಪಿಐ, ಸಿಸಿಬಿ ರವರಿಗೆ ವಿಚಾರಣೆ ಮಾಡಿ, ವರದಿ ಕಳಿಸುವಂತೆ ಕಳಿಸಿದ್ದನ್ನು ಸದರಿ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ವಾಮಮಾರ್ಗದಿಂದ ಪಡೆದುಕೊಂಡು ಈ ಮೇಲೆ ನಮೂದಿಸಿದ ಕಾರಿನ ಮಾಲೀಕನ ಹೆಂಡತಿಯನ್ನು ಸಂಪರ್ಕಿಸಿ ಅವರಿಂದ ಅಕ್ರಮ ಸಂಭಾವನೆ 40,000-00 ರೂಪಾಯಿ ಬೇಡಿಕೆ ಸಲ್ಲಿಸಿ, 20-000-00 ರೂ.ಗೆ ಮಾತನ್ನು ಕುದುರಿಸಿ, ಸದರಿ ಹಣವನ್ನು ದಿನಾಂಕ:27-08-98 ರಂದು ತಮ್ಮ ಮನೆಯಲ್ಲಿ ನೀಡುವಂತೆ ತಿಳಿಸಿ, ಅಧಿಕಾರದ ದುರುಪಯೋಗ ಪಡೆದುಕೊಂಡು ವಾಮಮಾರ್ಗದಿಂದ ಹಣಗಳಿಸುವ ದುರುದ್ದೇಶ ಹೊಂದಿ ಓರ್ವ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ ಅತೀವ ದುರ್ನಡತೆ ಪ್ರದರ್ಶಿಸಿರುತ್ತೀರಿ."

"ಕು.ಚಂದ್ರಿಕಾ ಇವರು ಮೈಸೂರು ಕಮೀಷನರ್ ನೀಡಿದ ಅರ್ಜಿಯು ನಿಮಗೆ ಸಂಬಂಧವಿಲ್ಲದಿದ್ದರೂ, ಅದರ ಪ್ರತಿಯನ್ನು ವಾಮಮಾರ್ಗದಿಂದ ಪಡೆದುಕೊಂಡು ಕೆಎ-05-9795ರ ಕಾರಿನ ಮಾಲೀಕರಿಂದ ಹಣ ದೋಚುವ ಇರಾದೆ ಹೊಂದಿ, ಕಾರಿನ ಮಾಲೀಕರ ಹೆಂಡತಿ ಶ್ರೀಮತಿ ಬಿ.ಜೆ.ನಿರ್ಮಲ, ಕೋಂ ಸಂಪತ್‌ಕುಮಾರ್ ಇವರನ್ನು ಸಿಹೆಚ್‌ಸಿ-141 ಪುಟ್ಟರಾಜು, ಸಿಪಿಸಿ-22 ಶಿವಕುಮಾರ ರವರನ್ನು ಬೆಂಗಳೂರಿಗೆ ಕಳಿಸಿ, ಪೋನ್ ಮುಖಾಂತರ ಸಂಪರ್ಕಿಸಿ, ಸದರಿ ಕಾರು ಮಾಲೀಕರು ಮತ್ತು ಕಾರನ್ನು ಕೇಸಿನಲ್ಲಿ ಸೇರಿಸುವುದಾಗಿ ಹೇಳಿ, ಕೇಸಿನಲ್ಲಿ ಸೇರಿಸದಂತೆ ಮಾಡಲು ಮಾಲೀಕರು ರೂ.40,000/- ಅಕ್ರಮ ಸಂಭಾವನೆ ನೀಡುವಂತೆ ಒತ್ತಾಯಿಸಿ, ಅವರು ಒಪ್ಪದಿದ್ದಾಗ ರೂ.20,000/- ನೀಡುವಂತೆ ತಿಳಿಸಿ, ನೀವೊಬ್ಬ ಜವಾಬ್ದಾರಿಯುತ ಹಿರಿಯ ಸರ್ಕಾರಿ ಅಧಿಕಾರಿಯಾಗಿ ಅಕ್ರಮವಾಗಿ ಸಂಭಾವನೆ ಪಡೆಯುವುದು ಕಾನೂನು 7, 13(1)(ಡಿ) ಮತ್ತು 13(2) ಲಂಚ ನಿರೋಧಕ ಕಾಯ್ದೆ ಪ್ರಕಾರ ಘೋರ ಅಪರಾಧವೆಂದು ಗೊತ್ತಿದ್ದು, ಕೂಡ ನೀವು ಇಲಾಖೆಗೆ ಕಳಂಕ ಬರುವ ರೀತಿಯಲ್ಲಿ ವರ್ತಿಸಿ, ಕರ್ತವ್ಯದಲ್ಲಿ ಬೇಜವಾಬ್ದಾರಿ, ಘೋರ ದುರ್ನಡತೆ ಪ್ರದರ್ಶಿಸಿರುತ್ತೀರಿ ಹಾಗೂ ಒಬ್ಬ ಪೊಲೀಸ್ ಅಧಿಕಾರಿಯಾಗಿ ಸರ್ಕಾರಿ ನೌಕರರಿಗೆ ತಕ್ಕದಲ್ಲದ ರೀತಿಯಲ್ಲಿ ನಡೆದು ಕೊಂಡಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:30-09-2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಮಾಡಲಾದ ಆರೋಪವು ಲಂಚ ನಿರೋಧಕ ಕಾಯ್ದೆ (ಪ್ರಿವೆನಶನ್ ಆಫ್ ಕರಪ್ಷನ್ ಆಕ್ಟ್) ಅಡಿ ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುತ್ತದೆ. ಆರೋಪಗಳು ಅತೀ ಗಂಭೀರ ಸ್ವರೂಪದ್ದಾಗಿರುತ್ತದೆ. ಅಲ್ಲದೇ, ಇವರ ವಿರುದ್ಧ ಮೈಸೂರು ಜಿಲ್ಲಾ ಪ್ರಧಾನ ಸತ್ರ ವಿಶೇಷ ನ್ಯಾಯಾಲಯದಲ್ಲಿ ಸ್ಪೆಷಲ್‌ಕೇಸ್ ಸಂ.143/2002ರಲ್ಲಿ ವಿಚಾರಣೆ ನಡೆಯುತ್ತಿದೆ. ನ್ಯಾಯಾಲಯ ಪ್ರಕ್ರಿಯೆ ಹಾಗೂ ಇಲಾಖಾ ವಿಚಾರಣೆಯ ಪ್ರಕ್ರಿಯೆ ಎರಡೂ ಒಂದೇ ಉದ್ದೇಶದ್ದೇ ಆದರೂ, ಇಲಾಖಾ ವಿಚಾರಣೆ ಪ್ರಕ್ರಿಯೆ ಬೇರೆ, ನ್ಯಾಯಾಲಯ ಪ್ರಕ್ರಿಯೆಯೇ ಬೇರೆ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಇತ್ಯರ್ಥವಾಗುವವರೆಗೆ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸಬಾರದೆಂದು ಇರುವುದಿಲ್ಲ. ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪೊಲೀಸ್ ಇಲಾಖೆಗೆ ಕಳಂಕ ತರುವ ರೀತಿಯಲ್ಲಿ ವರ್ತಿಸಿರುವುದು ಇವರ ಘೋರ ದುರ್ನಡತೆಗೆ ಸಾಕ್ಷಿ ಆಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 32 ಪೊಸಿಅ 2006 ಬೆಂಗಳೂರು, ದಿನಾಂಕ:8ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಗಂಗರಾಜ್, ಮಾಜಿ ಪಿಐ, ಹನೂರು ಪೊಲೀಸ್ ಠಾಣೆ, ಚಾಮರಾಜ ನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:05-11-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಆರ್.ಎ. ಕುಲಕರ್ಣಿ

ಪಿ.ಆರ್. 1370

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ವಿಷಯ: ಶ್ರೀ ಸಿದ್ಧಗಂಗಯ್ಯ, ಪಿಎಸ್‌ಐ ಇಮ್ಮಿಗ್ರೇಷನ್ ವಿಭಾಗ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ.

ಓದಲಾಗಿದೆ:
1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಗುಪ್ತವಾರ್ತೆ ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:82/ಡಿಇ/ಆರ್-7/2001, ದಿನಾಂಕ:05-10-2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:52/ಅಪೀಲು/2001-02, ಓಬಿ ಸಂಖ್ಯೆ:335/2002, ದಿನಾಂಕ:06-04-2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13-05-2002
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/13/2002-03, ದಿನಾಂಕ:23-10-2002.

ಪ್ರಸ್ತಾವನೆ:

ಶ್ರೀ ಎಂ.ಸಿದ್ದಗಂಗಯ್ಯ, ಪಿಎಸ್‌ಐ ಇಮ್ಮಿಗ್ರೇಷನ್ ವಿಭಾಗ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

ದೋಷರೋಪಣೆ:

"ಶ್ರೀ ಎಂ.ಸಿದ್ಧಗಂಗಯ್ಯ, ಪಿಎಸ್ಐ., ಇಮ್ಮಿಗ್ರೇಷನ್ ವಿಭಾಗ, ಬೆಂಗಳೂರು ರವರು ಆದ ನೀವು ಬೆಂಗಳೂರು ವಿಮಾನ ನಿಲ್ದಾಣದಲ್ಲಿ ಇಮಿಗ್ರೇಷನ್ ಕ್ಲಿಯರೆನ್ಸ್ ಕರ್ತವ್ಯನಿರ್ವಹಿಸುತ್ತಿದ್ದು, ದಿನಾಂಕ:31-05-2001ರಂದು ರಾತ್ರಿ ವಿಮಾನ ಸಂಖ್ಯೆ:ಐಸಿ-101ರಲ್ಲಿ ಪ್ರಯಾಣಿಸುತ್ತಿದ್ದ ಇಬ್ಬರು ಪ್ರಯಾಣಿಕರಾದ 1) ಇಂದ್ರಮತಮ್ಮ ಕಾಮಿನಿ, ರಹದಾರಿ ಪತ್ರ ಸಂಖ್ಯೆ:087552 2) ಖುರ್ಷಿದ್ ಬೀ ಪಠಾಣ, ರಹದಾರಿ ಪತ್ರ ಸಂಖ್ಯೆ:ಬಿ-2890668 ರವರ ರಹದಾರಿ ಪತ್ರಗಳನ್ನು ಪರಿಶೀಲಿಸುವಾಗ ನಿಯಮಬಾಹಿರವಾಗಿ ಈ ಪ್ರಯಾಣಿಕರ ಎಂಬಾರ್ಕೇಷನ್ ಸ್ಲಿಪ್‌ನಲ್ಲಿ ನಿರ್ಗಮನ ಸೀಲ್‌ಗಳನ್ನು ಹಾಕಿರುತ್ತೀರಿ ಹಾಗೂ ಈ ಪ್ರಯಾಣಿಕರನ್ನು ಇ.ಸಿ.ಎನ್.ಆರ್. ಎಂಡಾರ್ಸ್‌ಮೆಂಟ್ ಇಲ್ಲದೆ ಕುವೈಯತ್‌ಗೆ ಕಳುಹಿಸಲು ಪ್ರಯತ್ನಿಸಿದ್ದೀರಿ. ಶಿಸ್ತು ಇಲಾಖೆಯಲ್ಲಿ ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಗಳಾಗಿ ವಿದೇಶಿಯರ ರಹದಾರಿಗಳನ್ನು ಪರಿಶೀಲಿಸಿ ಕ್ಲಿಯರೆನ್ಸ್ ನೀಡುವುದು ಒಂದು ಅತ್ಯಂತ ಗಮನಹರಿಸುವ ಕರ್ತವ್ಯವೆಂದು ತಿಳಿಸಿದ್ದರೂ ಈ ರೀತಿ ಉದಾಸೀನತೆ ತೋರಿ. ಪ್ರಯಾಣಿಕರನ್ನು ವಿದೇಶಕ್ಕೆ ಕಳುಹಿಸಲು ಪ್ರಯತ್ನಿಸಿ ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್, ಗುಪ್ತವಾರ್ತೆ, ಬೆಂಗಳೂರುನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 05-10-2001ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, (ಆಡಳಿತ ಮತ್ತು ಸಿಎಆರ್) ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:06-04-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನೂ ಪರಿಶೀಲಿಸಲಾಗಿದೆ. ಅರ್ಜಿದಾರರು ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಅವರ ಕರ್ತವ್ಯ ಅತೀ ಸೂಕ್ಷ್ಮವೆಂದು ತಿಳಿದಿದ್ದರೂ ಸಹ, ಮುಂದಾಗಿ ಎಂಬಾರ್ಕೇಷನ್ ಸ್ಲಿಪ್‌ಗೆ ಇಮ್ಮಿಗ್ರೇಷನ್ ಸೀಲು ಹಾಕಿರುವುದು ಇವರ ಕರ್ತವ್ಯ ಲೋಪಕ್ಕೆ ಸಾಕ್ಷಿಯಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 109 ಪೊಸಿಅ 2002 ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿದ್ಧಗಂಗಯ್ಯ, ಪಿಎಸ್ಐ ಇಮ್ಮಿಗ್ರೇಷನ್, ವಿಭಾಗ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:13-05-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಆರ್.ಎ. ಕುಲಕರ್ಣಿ

ಪಿ.ಆರ್. 1377

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ವಿಷಯ: ಶ್ರೀ ಪಿ.ಟಿ.ಸುಬ್ರಮಣ್ಯ, ಪಿಎಸ್ಐ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ.

ಓದಲಾಗಿದೆ:
1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಪನ್ಸಿ/ಡಿಇ/9/99-2000, ಓಬಿ ಸಂಖ್ಯೆ:155/2000-01, ದಿನಾಂಕ:28-03-2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ:ಅಪೀಲು/1/50/2001-02, ದಿನಾಂಕ:10-05-2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:07-12-2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/85/2002-03 ದಿನಾಂಕ:09-04-2003.

ಪ್ರಸ್ತಾವನೆ:

ಶ್ರೀ ಪಿ.ಟಿ.ಸುಬ್ರಮಣ್ಯ, ಪಿಎಸ್ಐ ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ದೋಷರೋಪಣೆ:

"ಶ್ರೀ ಪಿ.ಟಿ.ಸುಬ್ರಮಣ್ಯ, ಪಿಎಸ್ಐ, ಹಿಂದೆ ಬೆಂಗಳೂರು ನಗರ, ಮಲ್ಲೇಶ್ವರಂ ಸಂಚಾರಿ ವಲಯ ಪೊಲೀಸ್ ಠಾಣೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:09-05-1999 ರಾತ್ರಿ 10-00 ಗಂಟೆಯಲ್ಲಿ ವಾಹನ ಸಂಖ್ಯೆ:ಕೆಎ-01-ಕ್ಯೂ-2900 ಶ್ರೀ ಆನಂದ ಚೌದರಿ (2) ಕೆ.ಎ.02-ಬಿ-3000 ಶ್ರೀ ಗೋಪಾಲಕೃಷ್ಣ, (3) ಕೆ.ಎ-04-ಆರ್4751 ಶ್ರೀ ಸದಾನಂದ (4) ಕೆಎ-04-ಹೆಚ್-4062 ಶ್ರೀ ರಮೇಶ್ ರವರುಗಳು ಕುಡಿದ ಅಮಲಿನಲ್ಲಿ ವಾಹನ ಚಾಲನೆ ಮಾಡಿದ ಬಗ್ಗೆ ಪರಿಶೀಲಿಸಿದ್ದು, ಮೋಟಾರ್ ವಾಹನ ಕಾಯಿದೆ

ರಿಜಿಸ್ಟರ್‌ನಲ್ಲಿ ಯಾವುದೇ ನಮೂದನೆಗಳು ಇರುವುದಿಲ್ಲ ಹಾಗೂ ಕೆ.ಸಿ.ಜನರಲ್ ಆಸ್ಪತ್ರೆಯಲ್ಲಿ ಮೆಮೋ ಮಾಡಿಸಿ ವಾಹನ ಸವಾರರಿಂದ ತಲಾ 1000 ರೂ.ಗಳಿಂದ 2,000-00 ರೂ.ಗಳ ವರೆಗೆ ಹಣವನ್ನು ಪಡೆದು ಯಾವ ಪ್ರಕರಣಗಳು ದಾಖಲೆ ಮಾಡದೆ ಆರೋಪ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರದೇ ಸಾರ್ವಜನಿಕರಿಂದ ಅಕ್ರಮ ಸಂಭಾವನೆ ಪಡೆದು ಸರ್ಕಾರಕ್ಕೆ ಸಲ್ಲಿಸಬೇಕಾದ ಹಣವನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಕರ್ತವ್ಯಲೋಪ ಅಧಿಕಾರ ದುರುಪಯೋಗ ಹಾಗೂ ದುರ್ನಡತೆಯನ್ನು ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:28-03-2001ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯನ್ನು ನಿಯಮಾನುಸಾರ ನಿಗದಿತ ಅವಧಿಯೊಳಗೆ ಸಲ್ಲಿಸದಿರುವ ಕಾರಣ, ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:10-05-2002ರ ಹಿಂಬರಹದಲ್ಲಿ ಪುರಸ್ಕರಿಸಲು ಸಾಧ್ಯವಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸಂಚಾರಿ ವಲಯದ ಪಿಎಸ್‌ಐ ಆಗಿದ್ದು, ಅವರೇ ಪ್ರಕರಣ ದಾಖಲಿಸದೇ ಕರ್ತವ್ಯ ಚ್ಯುತಿ ಎಸಗಿರುವುದು ವಿಚಾರಣಾ ವರದಿಯಿಂದ ಭಾಗಶ: ರುಜುವಾತಾಗಿರುತ್ತದೆ. ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆ ಆರೋಪಕ್ಕೆ ತಕ್ಕಂತೆ ಇದ್ದರೂ, ಕೆಸಿಎಸ್‌ಆರ್‌ನ ನಿಯಮಗಳನ್ವಯ ಅವಧಿ ನಿಗದಿ ಪಡಿಸದೇ ಇರುವ ಕಾರಣ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶ: ಮಾರ್ಪಡಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 288 ಪೊಸಿಅ 2002 ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಟಿ.ಸುಬ್ರಮಣ್ಯ, ಪಿಎಸ್‌ಐ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:07-12-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಶೀಲಿಸಿ ಶಿಸ್ತು ಪ್ರಾಧಿಕಾರಿಯ ದಿನಾಂಕ:28-03-2001ರ ಆದೇಶವನ್ನು ಭಾಗಶ: ಮಾರ್ಪಡಿಸಿ, ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ಒಂದು ವರ್ಷದ ಅವಧಿಗೆ ಮುಂದೂಡುವ ದಂಡನೆ ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎ. ಕುಲಕರ್ಣಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1378

ವಿಷಯ: ಶ್ರೀ ಕೆ.ಎಸ್.ತನ್ವೀರ್, ಪಿ.ಎಸ್.ಐ., ಚಾಮರಾಜಪೇಟೆ ಸಂಚಾರಿ ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

ಓದಲಾಗಿದೆ:
1) ಶಿಸ್ತು ಪ್ರಾಧಿಕಾರಿ ಹಾಗೂ ಐಜಿಪಿ, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಡಿಇ/68/ಉವ/2003-04, ದಿನಾಂಕ:06-04-2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/ 6/21/2005-06 ದಿನಾಂಕ:07-07-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27-10-2005.
4) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/138/2005 ದಿನಾಂಕ:06-03-2006.

ಪ್ರಸ್ತಾವನೆ:

ಶ್ರೀ ಕೆ.ಎಸ್.ತನ್ವೀರ್, ಪಿ.ಎಸ್.ಐ., ಧಾರವಾಡ ಗ್ರಾಮೀಣ ಪೊಲೀಸ್ ಠಾಣೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ದೊಷರೋಪಣಾ ಪತ್ರ ಹೊರಡಿಸಲಾಗಿದೆ.

ದೋಷಾರೋಪಣೆ:

"ನೀವು ಧಾರವಾಡ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಅಂತಾ ಓ.ಓ.ಡಿ. ಆಧಾರದ ಮೇಲೆ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾಗ, ದಿನಾಂಕ:27-11-2002 ರಂದು ರಾತ್ರಿ 11-00 ಗಂಟೆಗೆ ಒಬ್ಬ ಬಸಪ್ಪ ಮರಿಯಪ್ಪ ಕುರಿ, ಸಾ||ಅಮ್ಮಿನಭಾವಿ ಈತನನ್ನು ಅನಧಿಕೃತವಾಗಿ ಠಾಣೆಗೆ ಕರೆತಂದು ದಿನಾಂಕ:27-11-2002ರ ರಾತ್ರಿ 10-00 ಗಂಟೆಯಿಂದ ದಿನಾಂಕ: 29-11-2002ರ ಬೆಳಗಿನ ಜಾವ 02-30 ಗಂಟೆಯವರೆಗೆ ಅಕ್ರಮ ಬಂಧನದಲ್ಲಿಟ್ಟು ಸದರಿ ನಮೂದಿಸಿದ ವ್ಯಕ್ತಿ ದಿನಾಂಕ:

29-11-2002 ರಂದು ಬೆಳಗಿನ ಜಾವ 3-00 ಗಂಟೆಗೆ ಮರಣ ಹೊಂದಿದ್ದು, ತಾವುಗಳು ತಮ್ಮ ಕರ್ತವ್ಯದಲ್ಲಿ ಈ ಮೇಲಿನಂತೆ ಕರ್ತವ್ಯಲೋಪ ಮಾಡಿ, ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿದ್ದು ಅದೆ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿ ಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯನ್ನು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಐಜಿಪಿ, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ:06-04-2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರು ಇನ್ನೂ ಕರ್ತವ್ಯದಲ್ಲಿ ಅನುಭವದ ಕೊರತೆ ಮತ್ತು ಅಲ್ಪಾವಧಿಯ ಸೇವೆ ಹಾಗೂ ಓಓಡಿ ಮೇಲೆ ಠಾಣೆಯಲ್ಲಿ ಕರ್ತವ್ಯ ಮಾಡುತ್ತಿದ್ದುದನ್ನು ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:07-07-2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಗೆ ಪುನರ್ ನೇಮಿಸಿ, ಇವರ ವೇತನವನ್ನು ಪಿ.ಎಸ್.ಐ. ಹುದ್ದೆಯ ಕನಿಷ್ಠ ವೇತನಕ್ಕೆ ಮೂರು ವರ್ಷಗಳ ಕಾಲ ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಇಳಿಸಿದ ದಂಡನೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ದು:ಖಪತಗೊಂಡಿದ್ದ, ಹೊಡೆತ ಬಡಿತಗಳಿಂದ ನರಳುತ್ತಿದ್ದವರನ್ನು ಅಕ್ರಮವಾಗಿ ಠಾಣೆಯಲ್ಲಿ ಬಂಧನದಲ್ಲಿಟ್ಟಿರುವುದುಗೊತ್ತಿದ್ದರೂ, ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ಎಸಗಿ, ಸದರಿಯವರ ಮರಣಕ್ಕೆ ಕಾರಣರಾಗಿರುತ್ತಾರೆ.

ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದರೂ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಮೇಲ್ಮನವಿ ಪ್ರಾಧಿಕಾರಿ ಇವರನ್ನು ಕರ್ತವ್ಯದಲ್ಲಿ ಪುನರ್ ನೇಮಿಸಿರುತ್ತಾರೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 310 ಪೊಸೆಅ 2006 ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎಸ್.ತನ್ವೀರ್, ಪಿ.ಎಸ್.ಐ., ಚಾಮರಾಜಪೇಟೆ ಸಂಚಾರಿ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 27-10-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎ. ಕುಲಕರ್ಣಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1379

## ಶಿಕ್ಷಣ ಸಚಿವಾಲಯ

ವಿಷಯ: ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದಂತೆ ಪುಸ್ತಕಗಳನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

ಓದಲಾಗಿದೆ:
1) ದಿನಾಂಕ: 05.10.2005ರ ಸರ್ಕಾರದ ಆದೇಶ ಸಂಖ್ಯೆ: ಇಡಿ 319 ಎಲ್ಐಬಿ 2005.
2) ದಿನಾಂಕ: 07.02.2005ರ ಸರ್ಕಾರದ ಆದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004.
3) ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರ ಏಕಕಡತ ಸಂಖ್ಯೆ: ಸಾಗ್ರಂಇ/ಪುಖವಿ/ಪುಆಸರ/2006-07.

ಪ್ರಸ್ತಾವನೆ:

ಮೇಲೆ (1) ರಲ್ಲಿ ಓದಲಾದ ದಿನಾಂಕ: 05.10.2005ರ ಸರ್ಕಾರಿ ಆದೇಶದನ್ವಯ, ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದಂತೆ ಪುಸ್ತಕಗಳನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯನ್ನು ಪುನರ್ ರಚಿಸಲಾಯಿತು. ಆ ಆದೇಶದನ್ವಯ, ಸದರಿ ಸಮಿತಿಯ ಕಾಲಾವಧಿಯು, ಅದನ್ನು ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಸಮಿತಿ ಅಸ್ತಿತ್ವಕ್ಕೆ ಬರುವವರೆಗೆ ಇವೆರಡರಲ್ಲಿ ಯಾವುದು ನಂತರವೋ ಅಲ್ಲಿಯವರೆಗೆ ಇತ್ತು. ಮೇಲೆ (2) ರಲ್ಲಿ ಓದಲಾದ, ದಿನಾಂಕ: 07.02.2004ರ ಸರ್ಕಾರದ ಆದೇಶದನ್ವಯ, ಇತರೆ ಅಂಶಗಳ ಜೊತೆಗೆ, ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯು ಪಾಲಿಸಬೇಕಾದ ಕಾರ್ಯವಿಧಾನ, ಅದರ ಸ್ವರೂಪ ಮತ್ತು ಕಾರ್ಯ ವ್ಯಾಪ್ತಿಯನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರು, ಮೇಲೆ (3) ರಲ್ಲಿ ಓದಲಾದ ಏಕಕಡತದನ್ವಯ, ಸದರಿ ಸಮಿತಿಯನ್ನು ಪುನರ್ ರಚಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

2. ನಿರ್ದೇಶಕರ ಸದರಿ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ, ಈ ಕೆಳಕಂಡಂತೆ ಈ ಮೂಲಕ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಇಡಿ 57 ಎಲ್ಐಬಿ 2006, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2006

3. ಮೇಲೆ (2) ರಲ್ಲಿ ಓದಲಾದ ದಿನಾಂಕ: 07.02.2005ರ ಸರ್ಕಾರಿ ಆದೇಶದ ಅನುಬಂಧ-2 ರನ್ವಯ ನಿಗದಿಪಡಿಸಿದ, ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದ ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯ ಸ್ವರೂಪದ ಪ್ರಕಾರ ಅದನ್ನು ಈ ಕೆಳಕಂಡಂತೆ ಪುನರ್ ರಚಿಸಲು ಸರ್ಕಾರ ಈ ಮೂಲಕ ಆದೇಶಿಸಿದೆ.

| | |
|---|---|
| ಡಾ: ಎಸ್. ಶೆಟ್ಟರ್,<br>ನಿರ್ದೇಶಕರು, ಇಂದಿರಾಗಾಂಧಿ ರಾಷ್ಟ್ರೀಯ ಕಲಾ ಕೇಂದ್ರ, ನಂ.109, ಜೆ.ಸಿ. ರಸ್ತೆ, ಬೆಂಗಳೂರು. | ಅಧ್ಯಕ್ಷರು |
| ಡಾ: ಹನುಮಂತಯ್ಯ ಎಲ್.<br>ವಿಧಾನ ಪರಿಷತ್ ಸದಸ್ಯರು, ನಂ.207/ಜೆ, 3ನೇ ಬಿ ಮುಖ್ಯರಸ್ತೆ, 2ನೇ ಅಡ್ಡರಸ್ತೆ, ಬಸವೇಶ್ವರನಗರ, ಬೆಂಗಳೂರು. | ಸದಸ್ಯರು |
| ಡಾ: ಪಿ. ಸದಾಶಿವಮೂರ್ತಿ,<br>ಪ್ರಾಧ್ಯಾಪಕರು (ನಿವೃತ್ತ), ನಂ.618/619, 13ನೇ ಅಡ್ಡರಸ್ತೆ, ಎಂ.ಸಿ.ಬಡಾವಣೆ, ವಿಜಯನಗರ, ಬೆಂಗಳೂರು. | ಸದಸ್ಯರು |
| ಡಾ: ಹೆಚ್.ಎ. ಪಾರ್ಶ್ವನಾಥ್,<br>ನಂ.62, 3ನೇ ಅಡ್ಡರಸ್ತೆ, ಕುರುಬರಹಳ್ಳಿ, ಸಿದ್ಧಾರ್ಥನಗರದ ಹತ್ತಿರ, ಮೈಸೂರು. | ಸದಸ್ಯರು |
| ಶ್ರೀ ವಿಷ್ಣುನಾಯ್ಕ,<br>ಲೇಖಕ ಪ್ರಕಾಶಕರು, ಅಂಬಾರಕೊಡ್ಲ, ಅಂಕೋಲ, ಉತ್ತರ ಕನ್ನಡ - 581314. | ಸದಸ್ಯರು |
| ಡಾ: ಶ್ರೀ ಬಸವರಾಜ ಮಲ್ಲಶೆಟ್ಟಿ,<br>ಕನ್ನಡ ಉಪನ್ಯಾಸಕರು, ವಿಜಯನಗರ ಕಾಲೇಜು, ಹೊಸಪೇಟೆ, ಬಳ್ಳಾರಿ - 583201. | ಸದಸ್ಯರು |
| ಡಾ: ಶ್ರೀಮತಿ ಬಿ.ಟಿ. ಲಲಿತನಾಯಕ್,<br>ನಂ.659, 'ಸಂತೃಪ್ತಿ' ಬ್ಯಾಂಕ್ವಿಟ್ ಆಸ್ಪತ್ರೆ ಹಿಂಭಾಗ, ಮುಖ್ಯ ರಸ್ತೆ, 2ನೇ ಅಡ್ಡ ರಸ್ತೆ, ಹೆಬ್ಬಾಳ, ಬೆಂಗಳೂರು. | ಸದಸ್ಯರು |
| ಡಾ: ಸುನೀತಾ ಜೆ.ಪುರೋಹಿತ್<br>'ಶ್ರೀಮಂತಿನಿ' ಕಲ್ಯಾಣನಗರ, 4ನೇ ಅಡ್ಡ ರಸ್ತೆ, ಮಹಿಳಾ ಕಾಲೇಜು, ಹುಬ್ಬಳ್ಳಿ. | ಸದಸ್ಯರು |
| ಡಾ: ಆರ್.ಬಿ. ಖಾದರ ನಾಯಕ್,<br>ಬಸವೇಶ್ವರ ಇಂಜಿನಿಯರಿಂಗ್ ಕಾಲೇಜು, ಹುಬ್ಬಳ್ಳಿ. | ಸದಸ್ಯರು |
| ಪ್ರೊ: ಟಿ.ಎಸ್. ಲೋಹಿತಾಶ್ವ,<br>2567, 'ಭದ್ರ', 16ನೇ ಮುಖ್ಯ ರಸ್ತೆ, 16ನೇ ಅಡ್ಡರಸ್ತೆ, ಕುಮಾರಸ್ವಾಮಿ ಲೇಔಟ್, ಬೆಂಗಳೂರು | ಸದಸ್ಯರು |
| ಶ್ರೀ ಸುದರ್ಶನ ದೇಸಾಯಿ,<br>ಹಳದಿ ಚೀಳು, ಸುದರ್ಶನ ದೇಸಾಯಿ ಕಾಲೋನಿ, ಸರಸ್ವತಿಪುರ ಕೊನೆಯ ಭಾಗ, ಧಾರವಾಡ - 580002. | ಸದಸ್ಯರು |
| ಡಾ: ತಳವಾರ ವಿ.ಜಿ.,<br>ಪ್ರಾಧ್ಯಾಪಕರು, ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ, ಮೈಸೂರು ವಿಶ್ವ ವಿದ್ಯಾಲಯ,<br>ಮಾನಸ ಗಂಗೋತ್ರಿ, ಮೈಸೂರು | ಸದಸ್ಯರು |
| ಅಧ್ಯಕ್ಷರು,<br>ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. | ಸದಸ್ಯರು |
| ಅಧ್ಯಕ್ಷರು,<br>ಅಖಿಲ ಕರ್ನಾಟಕ ಪುಸ್ತಕ ವ್ಯಾಪಾರಿಗಳ ಸಂಘ (ರಿ), ಕೇರಾಫ್: ಹಂಗರಕಿ ಎಂಟರ್ ಪ್ರೈಸಸ್,<br>ವಿದ್ಯಾನಗರ, ಹುಬ್ಬಳ್ಳಿ - 21 | ಸದಸ್ಯರು |
| ಅಧ್ಯಕ್ಷರು,<br>ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. | ಸದಸ್ಯರು |
| ನಿರ್ದೇಶಕರು,<br>ಪ್ರಸಾರಾಂಗ, ಮಂಗಳೂರು ವಿಶ್ವ ವಿದ್ಯಾಲಯ, ಮಂಗಳೂರು. | ಸದಸ್ಯರು |
| ಅಧ್ಯಕ್ಷರು,<br>ಕರ್ನಾಟಕ ವಿಜ್ಞಾನ ಪರಿಷತ್, ಬೆಂಗಳೂರು. | ಸದಸ್ಯರು |
| ಡಾ: ನಾಗನಗೌಡರ ಐ.ಆರ್.<br>ಕರ್ನಾಟಕ ರಾಜ್ಯ ಗ್ರಂಥಾಲಯ ಸಂಘ, ಕೇರಾಫ್: ಇನ್‌ಸ್ಟಿಟ್ಯೂಟ್ ಆಫ್ ಇನ್‌ಫಾರ್‌ಮೇಷನ್<br>ಸ್ಟಡೀಸ್ ಅಪ್‌ಸ್ಟೇರ್ಸ್, 42ನೇ ಅಡ್ಡರಸ್ತೆ, 3ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು. | ಸದಸ್ಯರು |
| ಅಧ್ಯಕ್ಷರು,<br>ಬೆಂಗಳೂರು ಪುಸ್ತಕ ಮಾರಾಟಗಾರರ ಹಾಗೂ ಪ್ರಕಾಶಕರ ಸಂಘ, ನಂ.147,<br>ಪೊಲೀಸ್ ಆಯುಕ್ತರ ಕಛೇರಿ ಎದುರು, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು. | ಸದಸ್ಯರು |
| ನಿರ್ದೇಶಕರು,<br>ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

4. ಕನ್ನಡ ಮತ್ತು ಆಂಗ್ಲ ಭಾಷೆ ಪುಸ್ತಕಗಳನ್ನು ಹೊರತುಪಡಿಸಿ ಇತರೆ ಭಾರತೀಯ ಭಾಷೆಯ ಪುಸ್ತಕಗಳನ್ನು ಆಯ್ಕೆಮಾಡಲು ಆಯಾಯಾ ಭಾಷೆಯ ಭಾಷಾ / ವಿಷಯ ಪರಿಣಿತರನ್ನು ಕೋ-ಆಪ್ಟ್ ಮಾಡಿಕೊಳ್ಳಬಹುದು.

5. ಈ ಆದೇಶ ಹೊರಡಿಸಿದ ದಿನಾಂಕದಿಂದ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಸಮಿತಿ ಅಸ್ತಿತ್ವಕ್ಕೆ ಬರುವವರೆಗೆ ಇವೆರಡರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಈ ಸಮಿತಿಯು ಅಸ್ತಿತ್ವದಲ್ಲಿರುತ್ತದೆ.

6. ಈ ಸಮಿತಿಯ ಕಾರ್ಯವ್ಯಾಪ್ತಿ ಮೇಲೆ (2) ರಲ್ಲಿ ಓದಲಾದ ದಿನಾಂಕ: 07.02.2005ರ ಸರ್ಕಾರಿ ಆದೇಶದ ಅನುಬಂಧ 2 ರನ್ವಯ ನಿಗದಿಪಡಿಸುವಂತೆ ಇರುತ್ತದೆ. ಸದರಿ ಆದೇಶದ ಅನುಬಂಧ 1ರ ಪ್ರಕಾರ, ನಿಗದಿಪಡಿಸಿದ ಪುಸ್ತಕ ಆಯ್ಕೆಯ ಕಾರ್ಯವಿಧಾನವನ್ನು ಈ ಸಮಿತಿಯು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಂ.ಎನ್. ಸೋಮಶೇಖರ್
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

ಪಿ.ಆರ್. 1318

## INFRASTRUCTURE DEVELOPMENT SECRETARIAT

**Subject:** Shifting of the Railway Goods shed from Hubli Railway Station to Navalur, Dharwad District – grant of 100 acres of land free of cost to SWR – Orders reg.

**Read:**
1) DO.Letter No.LND/CR/51/02-03 dated 25.10.2002 of Dy.Commissioner, Dharwad District, Dharwad
2) Letter No.OSD/SWR/SBC/2003 dated 4.3.2003. of the Officer on special duty, SWR, Bangalore.
3) DO letter No. W/SWR/271/B/Misc. dated 11th Aug 2005 of the Chief Engineer (Co-Ord), SWR, Hubli.
4) DO letter No.T.143/4/UBL Terminal dated 14.04.2006 of Chief Operations Manager, SWR, Hubli.

**Preamble:**

Officer on special duty, SWR, Bangalore in his letter read at Sl.No.(2) above, has stated that Hubli junction is the headquarters of the newly constituted South Western Railway. It is the major railhead through which the goods from Hubli-Dharwad region are handled. To facilitate the shifting of the Goods Shed from the crowded area in the centre of Hubli to Navalur Station, he has requested for the transfer of 100 acres of land of the KIADB land to the Railways. This proposal, as explained by the then OSD, has two advantages i.e. (a) South Western Railway would be able to fully develop a fully equipped freight terminus at Navalur with modern facilities like containerization of warehousing etc., and (b) allow development of a modern passenger terminus at Hubli.

2. Hubli – Dharwad Chamber of Commerce & Industries also supported this idea of moving goods terminus to Navalur and the Deputy Commissioner, Dharwad in his letter dated 25-10-2002 read at Sl.No.(1) has recommended their proposal.

2. The South Western Railway has stated that the then Chief Minister while participating in the foundation stone laying ceremony by the then Prime Minister of India at Hubli on 14-2-03 announced that the 100 acres of land at Navalur station would be given free of cost to railways.

3. In a meeting held under the Chairmanship of the Chief Secretary to Government with the railway officers and others concerned on 18-3-2003, this subject was discussed and it was resolved as follows:

> "It was noted that the requirement of land had gone up from 30 acres to 100 acres. This land belongs to KIADB, which is an autonomous organization which charges for land based on the cost of acquisition. As a special case, Government would consider transferring this land to the Railways for a total consideration of Rs.1.5 crores to enable GM, SWR to expeditiously sanction and shift the Goods Shed. The request of the Railways would be processed by the IDD for formal approval of the competent authority. The other 70 acres of land could be earmarked for Rail related logistics support."

4. The South Western Railway were requested to make suitable budgetary provision in the Railway Budget. The South Western Railway were repeatedly reminded in the matter. But the Chief Engineer, South Western Railway in his letter dated 11th August 2005 read at Sl.No.(3) above, has stated that Railways need a minimum 100 acres of land for full development of freight terminus at Navalur, providing modern facilities like Containerisation, Warehousing etc., and requested to consider the allotment of land free of cost in line with public announcement made by the then Hon'ble Chief Minister.

6. The Government had also considered of the following important points which was deliberated in this regard:-

a) In the Chief Secretary's meeting held on 18-3-2003 **as a special case** it was resolved to transfer these lands to the Railways for Rs.1.50 crores. The cost of the land would have escalated now and the market price of these lands would be much higher.
b) The CE (Coordination), SWR in his letter dated 22.10.2005 intimated to Government that the Railway Board is also considering for sanctioning this project - Shifting of Goods Shed to Navalur – on out of turn basis in this financial year, if the State Government agrees to release the land free of cost, this would hasten up the consideration of the project for sanction by Railway Board early.
c) KIADB in their letter dated 28.10.2005 intimated to Government that they have spent Rs.804.66 lakhs for acquisition and development of lands in question including payment of compensation to farmers. Further, KIADB stated that the present market value of this land is in around Rs.10.60 crores KIADB Board, in its resolution of 27.6.2003 has sought payment @ Rs.5 lakhs per acre for this land.
d) The State Government has been contributing funds to the extent of 50% and 66% in respect of certain Railway projects. When the State Government is contributing funds for Central Projects, it is appropriate that the Railways pay an amount of Rs. 804.66 lakhs to the KIADB for these lands and decided to transfer 100 acres of land belonging to KIADB at Navalur, Dharwad District for the development of freight terminus free of cost to SWR.
e) IDD will have to make a provision of Rs.500 lakhs in its budget for 2006-07 for payment to KIADB for this land subject to condition that MoR should use 100 acres of KIADB land at Navalur, Dharwad District transferred to them for purpose of development of modern, fully equipped freight terminus and to facilitate with the shifting of goods shed from Hubli Railway station to Navalur.

7. In D.O letter dated 14.4.2006 of the Chief Operations Manager, South Western Railway, Hubli, it is stated that Ministry of Railways have already sanctioned Rs.9.62 crores in their current year budget for Cargo Complex at Navalur near Hubli and the work is going to start shortly.

8. Hence this order.

**GOVERNMENT ORDER NO. IDD 16 NSW 2003, BANGALORE DATED: 22nd AUGUST 2006**

After careful consideration of the above proposal Govt. is pleased to accord sanction for transfer to SWR, 100 acres of land belonging to KIADB at Navalur village near Hubli, Dharwad District free of cost for the development of a modern and fully equipped freight terminus, subject to the following conditions:

a. An agreement will have to be entered in to between MoR, General Manager, South Western Railway, Hubli and IDD in GoK in this regard and before the transfer of above land further to fulfilling of the following conditions:-

i. Land transferred should be used only for the purpose for which it is transferred and no alternative use of land should be resorted to.
ii. Expansion and modernisation of Hubli Railway Station as committed by Railways should be undertaken within three years.
iii. Development of modern fully equipped freight terminus on developed Land should be undertaken within three years.
iv. In the event of default of above mentioned conditions the land should be reverted back to State Government.

2. Further, Government is also pleased to reimburse the land acquisition cost of Rs.500 lakhs to KIADB. The expenditure shall be met from the budget provision under the Head of Account i.e. "5465-01-190-3-09 land for Railway Cargo Complex at Hubli".

3. Further, sanction is also accorded to set up a Committee under the Chairmanship of the Principal Secretary to Government, Infrastructure Development Department with the following as its members to monitor the implementation of the above developmental activities.

| | | |
|---|---|---|
| a) | The Principal Secretary to Government, IDD | ….Chairman |
| b) | The CEO, K-RIDE, Bangalore | ….Member Secretary |
| c) | The Chief Administrative Officer, SWR, Bangalore | - Member |
| d) | The Chief Engineer (Constructions), SWR, Bangalore. | -"- |
| e) | The Chief Engineer, PWD (C & B), North, Dharwad | -"- |
| f) | The M.D. ,iDeck,Bangalore. | -"- |
| g) | The GM, RITES Ltd.,Bangalore. | -"- |

4. The Chief Executive Officer, KIADB is authorized to draw the amount on Payee's Receipt duly countersigned by the Under Secretary to Government, Infrastructure Development Department towards reimbursement of the cost of 100 acres of land belonging to KIADB.

5. This order issues with the concurrence of the (i) Planning Department vide OM No.PD 14 FRO 2006, dated 6-5-2006 & (ii) Finance Department, vide its U.O. Note No. FD 1023/Exp-I/06 dated: 15-6-2006.

By Order and in the name of the Governor of Karnataka,

**N. MANJULA GEETHA**

PR- 1278

Under Secretary to Government,
Infrastructure Development Department.

**Subject:** Release of funds towards New Cost Sharing Railway Projects-Bangalore-Kengeri-Kengeri-Ramanagaram Doubling Railways projects – reg.

**Read:**
1) G.O. No. IDD 1 NSW 2002 dt. 22.11.2002.
2) G.O. No. IDD 1 NSW 2002 dt. 22.03.2002.
3) G.O. No. IDD 1 NSW 2002 dt. 19.02.2003.
4) G.O. No. IDD 47 NSW 2003 dt. 12.09.2003.
5) G.O. No. IDD 47 NSW 2003 dt. 22.1.2004.
6) G.O. No. IDD 47 NSW 2003 (P) dt. 26.03.2004.
7) G.O. No. IDD 51 NSW 2004 dt. 19.07.2004.
8) G.O. No. IDD 63 IDM 2005 dt. 25.05.2005.
9) G.O.No.IDD 66 NSW 05 dated: 15-12-2005.
10) The letter of Chief Administrative Officer, SWR, Bangalore vide No.W.352 CN/BNC dated: 10-8-06.

**Preamble:**

Government of Karnataka has so far released Rs. 10.50 crores towards its share of the Investment on Cost Sharing Projects, through various Government Orders read at Sl. Nos. 1 to 9 above.

2..The Chief Administrative Officer, South Western Railway, Bangalore, in his letter No.W..352CN/BNC dated: 10-8-2006 indicated that the Railways have already spent Rs.22.46 crores towards Bangalore-Kengeri doubling project and Rs.28.47 crores towards Kengeri-Ramanagaram doubling project totaling to Rs.50.93 crores and requested for immediate deposit of 2/3rd share of Government of Karnataka which comes to Rs.33.95 crores.

3. Government have examined the request of Railways and decided to release an amount of Rs.18.74 crores out of the available funds under the Head of Account "5465-01-190-3-05-211 - Cost Sharing for New Projects –Investments (Plan) towards Cost Sharing Railway Projects – for Bangalore-Kengeri – Kengeri-Ramanagaram railway line doubling project. Hence this order.

**GOVERNMENT ORDER NO.IDD 68 NSW 2003, BANGALORE, DATED:30th AUGUST 2006.**

After careful examination of the request of Railways, Government is pleased to release Rs.18.74 crores (Rupees eighteen crores and seventy four lakhs)only being the part of the balance 2/3rd share of Government of Karnataka out of the available funds under the head of account "5465-01-190-3-05-211 - Cost Sharing for New Projects – Investments (Plan)" only towards "Cost Sharing Railway Projects" – Bangalore – Kengeri – Kengeri – Ramanagaram Doubling Railway Projects.

2. The CFO and Company Secretary, iDeCK, is authorized to draw the amount on Payee's Receipt duly countersigned by the Under Secretary to Government, Infrastructure Development Department and iDeCK shall in-turn deposit the same with the Financial Advisor & Chief Accounts Officer (Cons), South Western Railway, Bangalore.

3. This order issues with the concurrence of the Finance Department, vide its U.O. Note No. FD 883/Exp-I/06 dated 22-08-2006.

By Order and in the name of the Governor of Karnataka,

**N. MANJULA GEETHA**

PR- 1306

Under Secretary to Government,
Infrastructure Development Department.